# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1675
**ಮಾನ್ಯ ಸದಸ್ಯರ ಹೆಸರು** : ಶ್ರೀ ಶಶೀಲ್ ಜಿ.ನಮೋಶಿ (ಶಿಕ್ಷಕರ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 14-03-2022
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕದಲ್ಲಿನ ವಿವಿಧ ಐತಿಹಾಸಿಕ ಸ್ಥಳಗಳಿಂದ ವಿದೇಶಕ್ಕೆ ರಫ್ತಾದ/ ಕಳುವಾದ ಅತ್ಯಮೂಲ್ಯವಾದ ಪುರಾತನ ವಸ್ತುಗಳು ಯಾವುವು; ಯಾವ ಯಾವ ದೇಶಗಳಲ್ಲಿ ಯಾವ ಯಾವ ವಸ್ತುಗಳು ರಫ್ತಾಗಿವೆ; (ಸಂಪೂರ್ಣ ವಿವರ ನೀಡುವುದು) | ಪುರಾತತ್ತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ವ್ಯಾಪ್ತಿಯಲ್ಲಿನ ಸಂಗ್ರಹಾಲಯಗಳಲ್ಲಿ ಪುರಾತನ ವಸ್ತುಗಳು ವಿದೇಶಕ್ಕೆ ರಫ್ತಾದ/ಕಳುವಾದ ಪ್ರಕರಣಗಳು ಯಾವುದು ಇರುವುದಿಲ್ಲ.<br><br>ಆದರೆ, ಮಂಡ್ಯ ಜಿಲ್ಲೆ, ಕೆ.ಆರ್.ಪೇಟೆ ತಾಲ್ಲೂಕು, ಕಿಕ್ಕೇರಿ ಗ್ರಾಮದಲ್ಲಿರುವ ಬ್ರಹ್ಮೇಶ್ವರ ದೇವಾಲಯದಲ್ಲಿ ಕಲಾಕೃತಿಯು ಕಳ್ಳತನವಾಗಿದ್ದು, ಈವರೆಗೆ ಪತ್ತೆಯಾಗಿರುವುದಿಲ್ಲ. |
| ಆ) | ಇದುವರೆಗೂ ವಿವಿಧ ದೇಶಗಳಿಂದ ಕರ್ನಾಟಕಕ್ಕೆ ವಾಪಸ್ಸು ಪಡೆದ ಪುರಾತನ ವಸ್ತುಗಳು ಯಾವುವು; (ಸಂಪೂರ್ಣ ಮಾಹಿತಿಯನ್ನು ನೀಡುವುದು.) | ಯಾವುದೇ ಪುರಾತನ ವಸ್ತುಗಳನ್ನು ವಾಪಸ್ಸು ಪಡೆದಿರುವುದಿಲ್ಲ. |
| ಇ) | ಕರ್ನಾಟಕ ರಾಜ್ಯಕ್ಕೆ ಸೇರಿದ ವಿವಿಧ ದೇಶಗಳಿಗೆ ಸ್ಥಳಾಂತರಗೊಂಡ ಐತಿಹಾಸಿಕ ವಸ್ತುಗಳನ್ನು ಮರಳಿ ಪಡೆಯುವ ಆಲೋಚನೆ ಸರ್ಕಾರಕ್ಕೆ ಇದೆಯೇ; ಇದ್ದಲ್ಲಿ, ಕೈಗೊಂಡ ಕ್ರಮಗಳೇನು; | ಈ ಹಿಂದೆ ಯುದ್ಧ ನಡೆದ ಸಂದರ್ಭಗಳಲ್ಲಿ ಗೆದ್ದಂತಹ ಪ್ರದೇಶಗಳಿಂದ ಅಮೂಲ್ಯವಾದ ಪುರಾತನ ವಸ್ತುಗಳನ್ನು ತಮ್ಮ ದೇಶಕ್ಕೆ ಕೊಂಡೊಯ್ದು ವಿದೇಶಿಗರು ತಮ್ಮ ದೇಶದ ಸಂಗ್ರಹಾಲಯಗಳಲ್ಲಿ ಪ್ರದರ್ಶನಕ್ಕೆ ಇಟ್ಟಿರುತ್ತಾರೆ. ಇವುಗಳನ್ನು ಹಿಂಪಡೆಯಲು ಕೇಂದ್ರ ಸರ್ಕಾರವು ಸಾಕಷ್ಟು ಪ್ರಯತ್ನಗಳನ್ನು ಕೈಗೊಂಡಿರುವುದಾಗಿ ತಿಳಿದುಬಂದಿದೆ.<br><br>ಈ ಬಗ್ಗೆ ರಾಜ್ಯ ಸರ್ಕಾರವು ನೇರವಾಗಿ ವಿದೇಶಗಳೊಡನೆ ವ್ಯವಹರಿಸುವ ಸಾಧ್ಯತೆಗಳಿರುವುದಿಲ್ಲ. |
| ಈ) | ಕರ್ನಾಟಕಕ್ಕೆ ವಿವಿಧ ದೇಶಗಳಿಂದ ಬಳುವಳಿಯಾಗಿ ಬಂದ ಅಥವಾ ವಿವಿಧ ದೇಶಗಳಿಂದ ಪಡೆದ ಐತಿಹಾಸಿಕ ಪುರಾತನ ವಸ್ತುಗಳು ಯಾವುವು? (ಮಾಹಿತಿ ನೀಡುವುದು) | ವಿದೇಶಗಳಿಂದ ಯಾವುದೇ ಪುರಾತನ ವಸ್ತುಗಳು ಬಳುವಳಿಯಾಗಿ ಅಥವಾ ಇನ್ನಿತರೇ ರೂಪದಲ್ಲಿ ಪಡೆದಿರುವುದಿಲ್ಲ. |

**TOR 108 TDV 2022**

**(ಆನಂದ್ ಸಿಂಗ್)**
ಪ್ರವಾಸೋದ್ಯಮ,
ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು.